# ವಸಂತ ಕುಸುಮಾಂಜಲಿ

ಸಚಿತ್ರ

**ಡಿ. ವಿ. ಜಿ.**



ಕಾವ್ಯಾಲಯ
ಮೈಸೂರು

# ಹೊಸ ಮುನ್ನುಡಿ

ಈ ಕವನಸಂಗ್ರಹಕ್ಕೆ "ವಸಂತ ಕುಸುಮಾಂಜಲಿ" ಎಂದು ಹೆಸರು ಕೊಟ್ಟವರು ಶ್ರೀ ಟಿ. ಎಸ್. ವೆಂಕಣ್ಣಯ್ಯನವರು.

ವಿಷಯದಲ್ಲಿಯೂ ಶೈಲಿಯಲ್ಲಿಯೂ ಈ ಕವನಗಳು ಕನ್ನಡಪ್ರಪಂಚಕ್ಕೆ ಆಗ ಬರಲಿದ್ದಂತೆ ತೋರಿದ ಹೊಸ ವಸಂತಕಾಲದ ಮೊದಲ ಗುರುತಿನ ಮೊಗ್ಗುಗಳಂಥವು—ಎಂಬುದು ಅವರ ಭಾವನೆ. ಅದು ಸ್ನೇಹಾಭಿಮಾನದ ಕಲ್ಪನೆ ಎಂದು ನನ್ನ ಮನಸ್ಸಿಗೆ ಆಗಲೂ ತೋರಿತ್ತು.

ಅಂದಿನಿಂದ ಇದುವರೆಗಿನ ಸುಮಾರು ೩೦ ವರ್ಷಗಳಲ್ಲಿ ಕನ್ನಡ ಹೊಸತನವನ್ನು ಸಂಪಾದಿಸಿಕೊಂಡಿರುವುದು ಈಗ ಚೆನ್ನಾಗಿ ಕಾಣುತ್ತಿದೆ. ಗ್ರಂಥದ ವಿಷಯ, ಶಬ್ದಸಾಮಗ್ರಿ, ವಾಕ್ಯರಚನೆಯ ರೀತಿ, ಪ್ರತಿಪಾದನಕ್ರಮ—ಇವೆಲ್ಲ ಹೊಸದಾಗುತ್ತಿವೆ. ಭಾಷೆಗೆ ಬಂದಿದ್ದ ಪೆಡಸುತನ,—ಅದರ ಎರಕದಚ್ಚಿನ ಸರಿತನ,—ಅದರ ಮರಮುಟ್ಟಿನ ಜಡ ಅಚ್ಚುಕಟ್ಟು—ಈಗ ಸಡಿಲವಾಗಿ, ಅದಕ್ಕೆ ಜೀವಂತಾಂಗದ ಮೃದುತೆ ನಯನಮ್ಯತೆಗಳು ಬರುತ್ತಿವೆ. ಇಂಗ್ಲಿಷ್ ಮೊದಲಾದ ಇತರ ವ್ಯಾವಹಾರಿಕ ಭಾಷೆಗಳ ಧೋರಣೆಯ ಅನುಕರಣೆ ಕನ್ನಡ ಸಾಹಿತ್ಯದಲ್ಲಿ ಆಗುತ್ತಿದೆ. ಹೀಗೆ ಶ್ರೀಮಾನ್ ವೆಂಕಣ್ಣಯ್ಯನವರ ಭವಿಷ್ಯದ್ದೃಷ್ಟಿ ಈಗ ಫಲಕ್ಕೆ ಬರುತ್ತಿದೆಯೆಂದು ಹೇಳಬಹುದಾಗಿದೆ. (ಅದು ಈ ಕೃತಿಗಳ ಪ್ರಭಾವವೆಂದು ಲೇಖಕನು ಎಷ್ಟುಮಾತ್ರವೂ ಎಣಿಸಿಕೊಂಡಿಲ್ಲವೆಂಬುದನ್ನು ಹೇಳಬೇಕಾದದ್ದಿಲ್ಲವಷ್ಟೆ?) ಈ ನವೋದಯಕ್ಕೆ ಕಾರಣ ಕಾಲಗರ್ಭದಲ್ಲಿ ಅಡಗಿಕೊಂಡಿರುವ ಮಾನವಪ್ರಗತಿ ಬೀಜ. ಆಗಿಂದಾಗಿಗೆ ಹೊಸಹೊಸದಾಗುತ್ತಿರುವುದು ಪ್ರಪಂಚದ ಎಲ್ಲ ಜೈವವಸ್ತುಗಳಿಗೂ ಸ್ವಭಾವಸಿದ್ಧವಾಗಿರುವ ಲಕ್ಷಣ. ಅದು ಭಾಷೆಸಾಹಿತ್ಯಗಳಿಗೂ ಉಂಟು.

ಪ್ರಕೃತ, ಈ ಮುದ್ರಣದಲ್ಲಿ ಕೆಲವುಕಡೆ ಕೊಂಚ ಕೊಂಚ ತಿದ್ದುಪಡಿಗಳಾಗಿರುವುದಲ್ಲದೆ ಮೂರು ತುಣುಕುಗಳು ಹೊಸದಾಗಿ ಸೇರಿವೆ. ಇವುಗಳಲ್ಲಿ ಒಂದು ಬಹುಶಃ ಇಪ್ಪತ್ತೈದು ವರ್ಷಗಳಷ್ಟು ಹಳೆಯದು.

ಏಪ್ರಿಲ್, ೧೯೫೧ ಡಿ. ವಿ. ಜಿ.

# ಮುನ್ನುಡಿ

ಉತ್ತಮವಾದ ಚಿಕ್ಕ ಗ್ರಂಥವೊಂದನ್ನು "ಪ್ರಬುದ್ಧ ಕರ್ಣಾಟಕದ" ಚಂದಾದಾರರಿಗೂ ಪೋಷಕರಿಗೂ ಸಂಘದ ಕೃತಜ್ಞತಾ ಸೂಚಕವಾಗಿ ಅರ್ಪಿಸಬೇಕೆಂದು ಸಂಕಲ್ಪಿಸಿ ಈ ಗ್ರಂಥವನ್ನು ಪ್ರಕಟಿಸಿರುವೆವು.

ಈ ಪುಸ್ತಕದಲ್ಲಿ ಎರಡು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಜೀವನ ತತ್ತ್ವಾಲೋಚನೆಯೂ ಎರಡನೆಯದರಲ್ಲಿ ಆಧುನಿಕ ಭಾರತೀಯ ಮಹಾಪುರುಷ ವಿಷಯಕವಾದ ಕವಿತೆಗಳೂ ಇವೆ. ಈ ಪುಸ್ತಕಕ್ಕೆ **ವಸಂತ ಕುಸುಮಾಂಜಲಿ** ಎಂಬ ಹೆಸರನ್ನಿಟ್ಟು ಪ್ರಕಟಿಸಿದ್ದೇವೆ. ಮೊದಲನೆಯ ಭಾಗವು ಉತ್ತಮವಾದ ಜೀವನಕ್ರಮದ ಸ್ವರೂಪವನ್ನು ತೋರಿಸುತ್ತದೆ. ಲೋಕಸೇವೆಯೇ ಮಾನವನ ಪರಮಧರ್ಮವೆಂಬ ನೀತಿಯು ಅದರಲ್ಲಿ ಪ್ರತಿಪಾದಿತವಾಗಿದೆ. ಈ ನೀತಿಯನ್ನು ನಡೆವಳಿಕೆಯಲ್ಲಿ ತೋರಿಸಿರುವ ಆಧುನಿಕ ಭಾರತೀಯ ಮಹಾಪುರುಷರ ಗುಣ ವಿಶೇಷಗಳು ದ್ವಿತೀಯ ಭಾಗದಲ್ಲಿ ಸೂಚಿತವಾಗಿವೆ.

ಪರೋಪಕಾರ ಧರ್ಮವು ನಮ್ಮ ದೇಶಕ್ಕೆ ಹೊಸದಲ್ಲವಾದರೂ ಅದಕ್ಕೆ ಸಮಾಜೋಪಯುಕ್ತವಾದ ರೂಪವನ್ನು ಕೊಡುವ ವಾಡಿಕೆಯು ಈಚೀಚೆಗೆ ಕಡಿಮೆಯಾಗುತ್ತ ಬಂದಿದೆ. ಒಂದು ದೇಶದ ಜನರು ಸಚೇತನರಾಗಿರುವರೆಂಬುದಕ್ಕೆ ಅವರ ಸಮಾಜಸೇವಾನಿಷ್ಠೆಯೇ ದೊಡ್ಡ ಗುರುತು. ಈ ವಿಷಯವನ್ನು ನಮ್ಮ ವಾಚಕರು ಗಮನಕ್ಕೆ ತಂದುಕೊಂಡು ಈ ನಮ್ಮ ಕಾಣಿಕೆಯನ್ನು ಆದರದಿಂದ ಪರಿಗ್ರಹಿಸುವರೆಂದು ದೃಢವಾಗಿ ನಂಬಿದ್ದೇವೆ.

**ಬೆಳ್ಳಾವೆ ವೆಂಕಟನಾರಾಯಣಪ್ಪ,**
ಅಧ್ಯಕ್ಷ,
ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜು.

# ವಿಜ್ಞಾಪನೆ

ಈ ಸಣ್ಣ ಪುಸ್ತಕದ ಮೊದಲನೆಯ ಭಾಗದಲ್ಲಿರುವ ಪದ್ಯಗಳು ಹತ್ತು ವರ್ಷಗಳ ಹಿಂದೆ (ಸುಮಾರು ೧೯೧೧) ಮುದ್ರಿತವಾಗಿದ್ದವು. ಅಲ್ಲಿಂದೀಚೆಗೆ ತನ್ನ ವಯಸ್ಸು ಹೆಚ್ಚಿದಂತೆ ಲೇಖಕನಿಗೆ ಅವುಗಳ ಗುಣ ವಿಷಯದಲ್ಲಿ ಸಂದೇಹವೂ ಹೆಚ್ಚುತ್ತ ಬಂತು.

ಎರಡನೆಯ ಭಾಗದಲ್ಲಿರುವ ಪದ್ಯಗಳು ಬಹುಶಃ ಕಳೆದ ಆರೇಳು ವರ್ಷಗಳಲ್ಲಿ ಆಗಾಗ ಲಿಖಿತವಾದುವು. ಇಂತಹ ಪ್ರಾಸ್ತಾವಿಕ ಪದ್ಯಗಳಲ್ಲಿರಬಹುದಾದ ಗುಣಲೇಶವು ಸಾಮಾನ್ಯವಾಗಿ ಬಹುಕಾಲ ನಿಲ್ಲತಕ್ಕದಲ್ಲವೆಂದು ಅನೇಕರು ಹೇಳುವರು.

ಹೀಗಿರಲಾಗಿ, ಈ ಪದ್ಯಗಳನ್ನು ಪುನಃ ಗ್ರಂಥರೂಪದಲ್ಲಿ ಪ್ರಕಟಗೊಳಿಸಬೇಕೆಂಬ ಆಸೆಯು ಲೇಖಕನಿಗೆ ಅಷ್ಟೇನೂ ತೀವ್ರವಾಗಿರಲಿಲ್ಲ. ಉತ್ತಮ ಕವಿತ್ವಕ್ಕಿರಬೇಕಾದ ಲಕ್ಷಣಗಳು ಅವುಗಳಲ್ಲಿಲ್ಲದೆ ಇರಬಹುದು; ಅವಿದ್ವತ್ಕವಿತೆಯ ದೋಷಗಳು ಹೇರಳವಾಗಿರಬಹುದು.

ಈ ಬಗೆಯ ಸಂಶಯವು ಬಲವಾಗಿದ್ದರೂ ಕನ್ನಡಿಗರಿಗೆ ಪರಮ ಗೌರವಾರ್ಹರಾದ ಮ|| ಬೆಳ್ಳಾವೆಯ ವೆಂಕಟನಾರಾಯಣಪ್ಪನವರೂ ಮ|| ತಳಕಿನ ವೆಂಕಣ್ಣಯ್ಯನವರೂ, ಹಾಗೆಯೇ ಈ ಪದ್ಯಗಳನ್ನು ಆಗಾಗ ಓದಿದ್ದ ಅಥವಾ ಕೇಳಿದ್ದ ಕಾವ್ಯಜ್ಞರಾದ ಇತರ ಕೆಲಮಂದಿ ಮಿತ್ರರೂ ಈ ಪದ್ಯ ಸಮುಚ್ಚಯವು ಪ್ರಕಟನೆಗೆ ಅರ್ಹವಾಗಿದೆಯೆಂದು ಲೇಖಕನಿಗೆ ಭರವಸೆ ಹೇಳಿ, ಇದು ಪ್ರಕಟವಾಗಲೇಬೇಕೆಂದು ನಿಶ್ಚಯಿಸಿದರು.

ತೋಟದಲ್ಲಿ ಎತ್ತರವಾದ ಮರಗಳೂ ಬಹುದೂರ ಹಬ್ಬಿರುವ ಬಳ್ಳಿಗಳೂ ಇದ್ದರೂ ನೆಲವನ್ನೇ ಅವಲಂಬಿಸಿಕೊಂಡಿರುವ ಬಡ ಹುಲ್ಲೂ ಇರುವಂತೆ ಸಾಹಿತ್ಯ ವನದಲ್ಲಿ ಮಹಾಕಾವ್ಯಗಳೂ ಉದ್ದಾಮ ಗ್ರಂಥಗಳೂ ಇದ್ದರೂ ಇಂತಹ ಅಲ್ಪ ಕೃತಿಗಳೂ ಇರಬಹುದಲ್ಲವೆ?

ಮಾರ್ಚಿ, ೧೯೨೨ ಡಿ. ವಿ. ಜಿ.

# ವಿಷಯಾನುಕ್ರಮಣಿಕೆ

## ಮೊದಲನೆಯ ಭಾಗ



## ಎರಡನೆಯ ಭಾಗ

# ಸರಳರಿಗೆ

ಸಂಜೆಯಲಿ ತಲೆಯೆತ್ತಿ
    ನಿಶಿಯಲ್ಲಿ ಬೆಳೆದು
ಮುಂಜಾವದಲಿ ಬಿರಿದು
    ಬಿಸಿಲೇರೆ ಬತ್ತಿ
ತೀರಿಕೊಳುವುದು ಬೇಗ, ಕಿರಿಬಾಳು, ನೋಡು ;
ಪಾರಿಜಾತವದೇನು, ಅರೆದಿನದ ಪಾಡು.

*   *   *

ನನೆಯಾಗಿ ಹತ್ತುದಿನ
    ಅರಳುತ್ತೈದುದಿನ
ವನಿತೆಯರ ಹೆರಳಿನಲಿ
    ಮೆರೆವುದೇಳುದಿನ ;
ಹಲವು ತಲೆಗೊಂದೆ ತಾಳೆಯ ಹೂವು ಸಾಕು ;
ಬಲದ ಬದುಕದು, ನೋಡು, ಬಿತ್ತರದ ಜೋಕು.

*   *   *

ಹೆಸರಿಲ್ಲದಲರುಗಳು
    ಬೀಳ್ಬಯಲಿನಲ್ಲಿ
ನಸುನಗುತ ನಲಿಯುವುವು
    ಬೇಳ್ಪರಿರದಲ್ಲಿ ;
ಗರುವಗೌರವವಿನಿಸುಮರಿಯದವುಗಳನು
ಗುರಿ ಮರೆತು ನಿರವಿಸಿದನೋ ವಿರಿಂಚನನು !

*   *   *

ಬಿರಿದಳಿವ ಹೂವೇಕೆ ?
  ಕಿರಿ ಬಾಳದೇಕೆ ?
ಮರೆವಿಗಾಹುತಿಯಪ್ಪ
  ಕಿರುಗವಿತೆಯೇಕೆ ?
ಎಡೆಯುಂಟು ಸೃಷ್ಟಿತಾಯುದ್ಯಾನದೊಳಗೆ
ಬಡಹೂವು ಬಡಹಾಡು ಬಡಬಾಳುಗಳಿಗೆ.

*          *          *

ಕಲೆ ಚಮತ್ಕಾರಗಳ-
  ನರಿಯದೀ ಕಂತೆ
ಗೆಳೆಯರಿರ್ವರಿಗೊರ್ಮೆ
  ನೆರಸ ತೋರ್ದಂತೆ
ಮುಂದೆಯುಂ ಸುಲಭದೊಲಿವರ ಕಾಣಲಹುದೆ ?
ಹಿಂದಿನಂದದ ಸರಳಜನರಿನ್ನು ಮಿಹರೆ ?

ಜುಲೈ ೨೦, ೧೯೫೦



## ಮೊದಲನೆಯ ಭಾಗ

# 'ಜೀವಗೀತೆ'ಯ ಪ್ರಸ್ತಾವನೆ

ಜೀವಗೀತೆಯು ಆಂಗ್ಲಭಾಷೆಯ ಕವಿಗಳಲ್ಲೊಬ್ಬನಾದ ವ್ಹಿಟ್ಟಿಯರ್ (J. G. Whittier) ಎಂಬಾತನ "ಮೈ ಸೋಲ್ ಅಂಡ್ ಐ" (ನನ್ನ ಜೀವವೂ ನಾನೂ) ಎಂಬ ಕೃತಿಯ ಅನುವಾದ.

ವ್ಹಿಟ್ಟಿಯರನು ಅಮೆರಿಕಾ ಖಂಡದ ಸಂಯುಕ್ತ ರಾಷ್ಟ್ರದಲ್ಲಿ ಕ್ರಿ. ಶ. ೧೮೦೭ ರಿಂದ ೧೮೯೨ ರ ವರೆಗೆ ಜೀವಿಸಿದ್ದನು. ಆತನು ಭಕ್ತಿಭರಿತವೂ ನೀತಿಬೋಧಕವೂ ಆದ ಅನೇಕ ಪದ್ಯಾವಳಿಗಳನ್ನು ಬರೆದಿರುತ್ತಾನೆ. ಅವು ಅತಿ ಲಲಿತವಾಗಿಯೂ ರಸವತ್ತಾಗಿಯೂ ಇರುವ ಕಾರಣ ಜನಸಾಮಾನ್ಯಕ್ಕೆಲ್ಲ ಆದರಣೀಯವಾಗಿವೆ. ಇಂಗ್ಲೆಂಡಿನ ಪ್ರಖ್ಯಾತ ವಾಗ್ಮಿಯೂ ರಾಜನೀತಿಕೋವಿದನೂ ಪ್ರಜಾಭಿಮಾನಿಯೂ ಆಗಿದ್ದ ಜಾನ್ ಬ್ರೈಟ್ ಮಹಾಶಯನು ವ್ಹಿಟ್ಟಿಯರನ ಕಾವ್ಯಗಳನ್ನು ಪದೇ ಪದೇ ಓದಿ ಸಂತೋಷಪಡುತ್ತಿದ್ದನು.

ವ್ಹಿಟ್ಟಿಯರನು ಧರ್ಮಸೂಕ್ಷ್ಮದರ್ಶಿಯೂ ಲೋಕಹಿತ ಚಿಂತಕನೂ ಆಗಿದ್ದನು. ಸಾಮಾನ್ಯ ಜನರ ರಾಜಕೀಯ ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನೆಲ್ಲ ಆತನು ತನ್ನ ಕಾವ್ಯಗಳಲ್ಲಿ ವಿಮರ್ಶಿಸಿ, ಅನ್ಯಾಯ ದೂಷಣೆಯನ್ನೂ ನ್ಯಾಯ ಘೋಷಣೆಯನ್ನೂ ಮಾಡಿರುತ್ತಾನೆ. ಪ್ರಜಾಪಕ್ಷವಾದಿಗಳಾದ ಕವಿಗಳಲ್ಲಿ ಆತನು ಅಗ್ರಗಣ್ಯನೆಂದು ಸುಪ್ರಸಿದ್ಧ ಪತ್ರಿಕಾಕರ್ತನೂ ಲೋಕೋಪಕಾರಿಯೂ ಆಗಿದ್ದ ಸ್ಟೆಡ್ ಮಹಾಶಯನ ಅಭಿಪ್ರಾಯ.

ಜೀವಗೀತೆಯು ಪ್ರಶ್ನೋತ್ತರ ರೂಪದಲ್ಲಿದೆ ; ಮನುಷ್ಯನು ತನ್ನ ಬಾಳಿಕೆಯ ರೀತಿಯನ್ನು ತನ್ನ ಮನಸ್ಸಿನಲ್ಲಿ ತಾನೇ ವಿಚಾರಮಾಡಿಕೊಂಡು, ತನ್ನೊಡನೆ ತಾನೇ ಸಂವಾದ ಬೆಳೆಸಿದಂತೆ ಇದೆ. ನಮ್ಮ ಪುರಂದರಾದಿ ದಾಸರುಗಳ "ಸಿಕ್ಕಿದೆಯಾ ಎಲೊ ಜೀವ", "ಮನವೇ ಮರೆಯದಿರೋ ಹರಿಯ" ಮೊದಲಾದ ಆತ್ಮಪರಿಶೋಧನೆಯ ಪದಗಳೂ, ಮಹಾರಾಷ್ಟ್ರದ ರಾಮದಾಸ

ಸ್ವಾಮಿಗಳ "ಮನಾಚೆ ಶ್ಲೋಕ"ವೂ, ಭರ್ತೃಹರಿಯ ಮನಸ್ಸಂಬೋಧನ ವಾಕ್ಯಗಳೂ ಇದೇ ಜಾತಿಯ ಕವಿತೆಯೆಂದು ಹೇಳಬಹುದು. ಬುದ್ಧಿಯು ಕೇಳುವ ಪ್ರಶ್ನೆಗಳಿಗೆ ಜೀವನು ಹೇಳುವ ಪ್ರತ್ಯುತ್ತರಗಳನ್ನು ವಾಚಕರ ಸೌಕರ್ಯಕ್ಕಾಗಿ ("    " ಈ ಬಗೆಯ) ಉದಾಹರಣ ಚಿಹ್ನೆಗಳಿಂದ ಸ್ಪಷ್ಟಪಡಿಸಿದೆ.

ಅಮೆರಿಕದ ವ್ಹಿಟ್ಟಿಯರನು ಪ್ರತಿಪಾದನೆಮಾಡಿರುವ ತತ್ತ್ವಗಳು ಭರತ ಖಂಡದ ಜನರಿಗೆ ಅಪೂರ್ವವಾದುವಲ್ಲ. ಆತನ ವಾಕ್ಯಗಳಿಗೆ ಸಮಾನವಾದ ವಾಕ್ಯಗಳನ್ನು ಭಗವದ್ಗೀತೆಯಲ್ಲಿಯೂ ಪುರಾಣಗಳಲ್ಲಿಯೂ ನಮ್ಮ ಮತಾಚಾರ್ಯರುಗಳ ಉಪದೇಶಗಳಲ್ಲಿಯೂ ದಾಸರ ಕೀರ್ತನೆಗಳಲ್ಲಿಯೂ ಯಥೇಷ್ಟವಾಗಿ ಕಾಣಬಹುದು. ಹೀಗೆ ಪಾಶ್ಚಾತ್ಯ ಮಹಾಕವಿಗಳೂ ಪೌರಸ್ತ್ಯ ಮಹಾಕವಿಗಳೂ ಮಾನವ ಜೀವನದ ಮುಖ್ಯವಿಷಯಗಳಲ್ಲಿ ಏಕವಾಕ್ಯರಾಗಿರುವುದನ್ನು ನೋಡಿದರೆ, 'ಭಗವಂತನು ತನ್ನ ಮಹಿಮೆಯನ್ನು ಎಲ್ಲ ಜನರಿಗೂ ತೋರಿಕೊಂಡಿರುವನು ; ಮಹನೀಯರು ಎಲ್ಲೆಲ್ಲಿಯೂ ಇರುವರು ; ಅವರು ಒಮ್ಮುಖದಿಂದ ಹೇಳುವ ತತ್ತ್ವಗಳು ಎಲ್ಲ ಕಾಲ ಎಲ್ಲ ದೇಶಗಳಲ್ಲಿಯೂ ಎಲ್ಲರಿಂದಲೂ ಮನ್ನಣೆ ಪಡೆಯಲು ಅರ್ಹವಾದುವು' ಎಂದು ಯಾರ ಮನಸ್ಸಿಗೂ ಹೊಳೆಯದೆ ಇರದು.



ಶ್ರೀಃ

ಪ್ರಣವ ವಿಬೋಧಕ ವದನಂ |
ಪ್ರಣತ ಶ್ರೇಯೋನಿಕೇತನಂ ಪ್ರಾಜ್ಞಧನಂ ||
ಗಣನಾಥಂ ಕವಿಗೀತಂ ||
ಗುಣಸಂಪದವೀಗೆ ಕೃತಿಗೆ ಕರುಣೋಪೇತಂ ||

---

# ಜೀವಗೀತೆ

ನಿಲ್ಲು ನಿಲ್ಲೆಲೊ, ಜೀವ, ನಿನ್ನನೇಕಾಂತದಲಿ
ದೇವನಿದಿರಲಿ ಮಾತನೊಂದ ಕೇಳ್ವೆಂ |
ನಿರ್ವಿಚಾರದಿ ಭವದ ಘೋರಾಂಧಕಾರದೊಳು
ನೀನೆತ್ತ ಪೋದಪೆಯೊ ನಿಂತು ನೋಡೈ |
ಪುರುಷರೂಪವ ಧರಿಸಿ ಧರೆಯೊಳಾದರದಿ ನೀ
ನಾವ ಕರ್ತವ್ಯಕಾಗಿರುವೆ ತಿಳಿಯೈ |
ಜೀವ ನಿನ್ನಯ ಜನ್ಮ ಸಾಫಲ್ಯವೆಂತಹುದು
ನಿನ್ನ ಧರ್ಮವದೇನು ಬಗೆದು ಪೇಳೈ ||
ದೇಹಸೌಖ್ಯವನಾಂತು ಮೆರೆವುದೋ ಬಂಧುಕುಲದೊಳ್ |
ಮುದವನೊಂದುವುದೊ ಮೇಣತಿಶಯದ ಧನವ ಗಳಿಸಿ |
ಕೀರ್ತಿಯೊಂದುವುದೊ ಮತ್ತಾವುದೈ ನಿನ್ನ ಧರ್ಮಂ ? |
—"ತಾನೊಂದುಮಲ್ತಿದರೊಳಾವುದುಂ ಧರ್ಮಮಲ್ತು" || ೧



ವ್ಹಿಟ್ಟಿಯರ್ ಕವಿ

ಸರ್ವಲೋಕಕೆ ಸಾಕ್ಷಿಯಾದ ದೇವನು ನಿನ್ನ
ಕರ್ಮಗಳನಾವಗಂ ನೋಳ್ಪನಲ್ತೆ |
ಆತನಿಚ್ಛೆಯನರಿಯುತದನೆ ಅನುವರ್ತಿಸುತ-
ಲಾತನಂ ಸೇವಿಪುದೆ ಧರ್ಮಮಲ್ತೆ |
ಅಂತಾದೊಡೀಗಳಾ ದೇವನ ಸನ್ನಿಧಿಯೊ-
ಳೀನ ಪೇಳುವೆ, ಜೀವ, ಭಯಮದೇಕೆ |
ನರರ ಬಳಿಯೊಳು ಪರುಷದಿಂದ ಚರಿಸುವ ನಿನಗೆ
ಪರಮನಿದಿರಲಿ ಬರಲು ಚಿಂತೆಯೇಕೆ ||
ಸತ್ಯಮಂ ಧರ್ಮಮಂ ನೀನೆಂತು ಕಾಯುತಿರ್ಪೆ |
ದೇವನಂ ನೀನೆನಿತು ಭಕ್ತಿಯಿಂ ಭಜಿಸುತಿರ್ಪೆ |
ಭೂತಕೋಟಿಯೊಳೆನಿತು ಮೈತ್ರಿಯಿಂ ನಡೆಯುತಿರ್ಪೆ |
ಆಯುಷ್ಯವೆಲ್ಲಮಂ ನೀನೆಂತು ಕಳೆಯುತಿರ್ಪೆ ? || ೨

“ ಅನ್ಯಾಯವೆಲ್ಲಿರ್ದೊಡಂ ಧೈರ್ಯದಿಂದೆ ನಾ-
ನದರ ಮೂಲವ ನಾಶಗೊಳಿಸುತಿರ್ಪೆಂ |
ಧರ್ಮಮದು ತಾನೆನಿತು ಬಲಮಿಲ್ಲದಿರ್ದೊಡಂ
ನಾನದರ ಕೈಂಕರ್ಯವೆಸಗುತಿರ್ಪೆಂ |
ಸ್ವಾತಂತ್ರ್ಯರಿಪು ನಿಹಿತ ಬಂಧನಂಗಳ ಕಳೆವ
ಜನರಿಂಗೆ ನಾಂ ಜಯವ ಬಯಸುತಿರ್ಪೆಂ |
ಅನೃತಮದು ತಾನೆನಿತು ಶಕ್ತಿವಡೆದಿರ್ದೊಡಂ
ನಾನದನು ಭರದಿಂದೆ ತಡೆಯುತಿರ್ಪೆಂ ” ||
—ಇಂತುಸಿರ್ವೊಡೆ ನಿನ್ನ ದನಿಯೇಕೆ ನಡುಗುತಿಹುದು |
ಜೀವ, ನೀನಿಂತು ಮಾಡಿರ್ದೊಡದೆ ಸುಕೃತಮಲ್ತೆ |
ಆದೊಡಂ ನೀನಂತು ಮಾಳ್ಪುದಕೆ ಕಾರಣಮದೇಂ |
ತತ್ತ್ವಚಿಂತೆಯೊ ಯಶಶ್ಚಿಂತೆಯೋ ದಿಟವನುಸಿರ್ವೆ || ೩

"ಮಾನಿಸರ ಮೆಚ್ಚಿಕೆಯೆ ನಾನೆಸಗುತಿರ್ಪೆಲ್ಲ
ಕಾರ್ಯಕಂ ಫಲ" ಮೆಂದು ಪೇೞ್ವೆಯೇನಯ್ಯ |
ಅಂತು ನೀನುಸಿರುವೊಡೆ ಬಲುಧನಮನಾರ್ಜಿಸುವ
ಕೃಪಣಗಂ ನಿನಗಮಿಹ ಭೇದಮೇನಯ್ಯ |
ಸ್ವಾರ್ಥತೆಯದೇತಕ್ಕೆ ಕೀರ್ತಿಯೇತಕೆ ನಿನಗೆ
ನಿನ್ನ ಪಯಣದ ಬಗೆಯನರಿಯೆಯೇನಯ್ಯ |
ಇಹದಿ ನಿನ್ನಯ ಬಾಳು ಮುಗಿದ ಬಳಿಕೆಲ್ಲಿ ನೀ-
ನಾವಪರಿಯಿರ್ದಪೆಯೊ ಬಲ್ಲೆಯೇನಯ್ಯ ||
ಮೃತ್ಯುವಿನ ಕಾರ್ಮುಗಿಲು ನಿನ್ನನಾವರಿಸಿದಂದು |
ನಿನ್ನ ದೃಷ್ಟಿಯು ನಷ್ಟಮಾಗೆ ನೀನಬಲನಾಗೆ |
ನಿನ್ನ ಗತಿಯಿಂತೆಂದು ನಿನಗಾರು ತೋರ್ಪರಯ್ಯ |
ಜೀವ, ನೀಂ ಸಾವೆನ್ನಲೇಕಿಂತು ಭೀತನಾದೆ? || ೪

"ಮೃತ್ಯುವಿನ ಕತ್ತಲೆಯು ಮುತ್ತಲೆತ್ತೆತ್ತಲುಂ
ಹಿಂದುಮುಂದುಗಳ ನಾನೆಂತು ತಿಳಿವೆಂ |
ಎನಿಬರೋ ಜೀವರ್ಕಳಾ ಮೃತ್ಯುಮುಖವನೇ
ದುಃಖದಿಂ ಪೊಕ್ಕು ಪಿಂದಿರುಗದಿರ್ಪರ್ |
ಮೃತ್ಯು ಬಳಿಸಾರಲಿನ್ನೆನಿಬರೋ ಚಿತ್ತದೊಳು
ಜಗದೊಡೆಯನನು ನೆನೆದು ನಲಿಯುತಿರ್ಪರ್ |
ಮೃತ್ಯುವನು ಮರೆಮರೆತು ಬದುಕಿ ಮತ್ತೆನಿಬರೋ
ಮೃತ್ಯುಮುಖವನೆ ಕಡೆಗೆ ಸೇರುತಿರ್ಪರ್ ||
ಅವರೊಳಾರುಂ ತಮ್ಮ ಹದನನೆನಗೆ ತಿಳಿಪಲಾರರ್ |
ಮೃತ್ಯುಭಯದಿಂ ಜಗವು ಗೋಳಿಡುತ ನಡುಗುತಿಹುದು !
ನಿಚ್ಚಮಾ ಮೃತ್ಯುವಿನ ಬಳಿಗೆ ನಾಂ ನಡೆಯುತಿಹೆನು |
ಅಲ್ಲಿನೆಲ್ಲಿಗೊ ಮುಂದೆ ನಾನದನದೆಂತು ತಿಳಿವೆಂ" || ೫

ಏನಿದೇನಿಂತು ಪೇಳುವೆ, ಜೀವ, ನಿನ್ನಯಾ
ಬುದ್ಧಿ ಧೈರ್ಯಗಳಿನಿತು ಕುಂದಲೇಕೆ |
ಲೌಕಿಕೋದ್ಯಮಗಳಲಿ ನಿನಗಿರ್ಪ ಜಾಣ್ಮೆಯದು
ಮೃತ್ಯುಮುಖದಲಿ ಮಾಯವಾಗಲೇಕೆ |
ಮೋದ ಖೇದಗಳಂತೆ ಭೀತಿಯುಂ ನಿನ್ನಯ
ಸ್ವಾಭಿಮಾನದೆ ಪುಟ್ಟಿ ಬೆಳೆವುದಯ್ಯ |
ಮತಿಯು ಮಂಕಾಗಲಜ್ಞಾನವಪ್ಪುದು ನಿನ್ನ
ಮತಿವೈಪರೀತ್ಯವೇ ಭೀತಿಯಯ್ಯ ||
ದೇವದೇವನು ನಿನ್ನ ರಿಪುಗಳಂ ಸದೆವನಲ್ತೆ |
ಆತನೆಡೆಯೊಳು ಭೀತಿಯೊಂದಿನಿಸುಮಾಗದಲ್ತೆ |
ಆತನಿಂ ನಿನ್ನ ಕತ್ತಲೆಯೆಲ್ಲ ಪರಿವುದಲ್ತೆ |
ಆತನಂ ಬಿಟ್ಟು ನೀಂ ಚಿಂತಿಪುದೆ ಮೌಢ್ಯಮಲ್ತೆ || ೭

ಪಿಂತಾದುದಂ ಮುಂದೆ ಬರ್ಪುದಂ ಚಿಂತಿಪುದು
ಮರುಳುತನವೆಂಬುದನು ಮರೆಯಬೇಡೈ |
ವರ್ತಮಾನದಿ ದೈವಭಕ್ತಿಯಂ ಸ್ಥಿರಗೊಳಿಸಿ
ಧರ್ಮಮಾರ್ಗದಿ ಚರಿಸಿ ಜಾಣನಾಗೈ |
ಮೃತ್ಯುವಿಂ ನಿನಗಾವ ಹಾನಿಯುಂ ಬಾರದೈ
ಮರಣಭೀತಿಯು ಮೂರ್ಖಜನರಿಗಯ್ಯ |
ಇಹದೊಳಂ ಪರದೊಳಂ ಪರಮೇಶನೊರ್ವನೇ
ತನ್ನ ಸಂತಾನದೊಡನಿರ್ಪನಯ್ಯ ||
ಅವನಿನನ್ಯವನೊಂದ ಭಾವಿಪುದೆ ಪಾಪಮಲ್ತೆ |
ಆತನೊಳೆ ಜೀವಕೋಟಿಗಳು ನಿಂದಿರ್ಪುವಲ್ತೆ |
ಅವರನಾತಂ ಭ್ರಾತೃವಾತ್ಸಲ್ಯ ಸೂತ್ರದಿಂದಂ |
ಬಂಧಿಸಿಹನಾ ಸೂತ್ರವಿಭಜನಮೆ ದುಃಖಮೂಲಂ || ೭

ಜಗವೆಂಬ ವೀಣೆಯಾ ತಂತ್ರಿಗಳಿ ಜೀವಿಗಳ್
ಅವರೆಲ್ಲ ಸಮದೊಳಿರೆ ಮಧುರ ನಿನದಂ |
ಆ ತಂತ್ರಿಗಳೊಳಾವುದೊಂದು ವಿಷಮಿಸಿದೊಡಂ
ನಾದಮೆಲ್ಲಂ ಕೆಡುಗುಮದರ ಕತದಿಂ |
ಜೀವ, ನೀನದರಿನಾ ಪ್ರೇಮ ಸೂತ್ರವನರಿಯು-
ತದರಂತೆ ಚರಿಸುವುದೆ ಧರ್ಮಸೂಕ್ಷ್ಮಂ |
ಭೂತಹಿತವಾಚರಿಸೆ ಭೂತಲವೆ ನಾಕವೈ
ತಪ್ಪಿದೊಡೆ ಭೂತಲವೆ ನರಕವಯ್ಯ ||
ನೀನೆನಿತು ಹಿತವನೆಸಗಿದೊಡೆ ನಿನಗನಿತು ಹಿತವೈ |
ನೆರೆಹೊರೆಯ ದುಃಖಮೇ ನಿನಗೀಗ ನರಕ ದುಃಖಂ |
ಅವರ ಸಂತಸಮೆ ನಿನ್ನಾತ್ಮಕ್ಕೆ ಪರಮ ಸುಖದಂ |
ಅದರಿನಾವಗಮೆಸಗುತಿರು ಜೀವ ಲೋಕಹಿತಮಂ || ೮

ಇಹದೊಳಂ ಪರದೊಳಂ ದಿನದೊಳಂ ನಿಶಿಯೊಳಂ
ಸರ್ವರಂ ಸರ್ವೇಶನೋವುತಿಹನು |
ಮನಸಿಗಂ ಬುದ್ಧಿಗಂ ಗೋಚರಿಸದೆಡೆಗಳೊಳ್
ಸರ್ವ ಕಾಲಂಗಳೊಳಮಾತನಿಹನು |
ನಿನ್ನಯ ಕ್ಲೇಶಂಗಳಾತನಿಂ ತೊಲಗುವುವು
ಆತನಭಯವನಿತ್ತು ಕಾವನಯ್ಯ |
ಆತನಂ ನೆರೆನಂಬುತಾತನಾಜ್ಞೆಯನರಿಯು-
ತದರವೊಲು ಚರಿಪವನೆ ಧನ್ಯನಯ್ಯ ||
ಆತನೊಲವಿಂ ನಿನ್ನ ದುರ್ಬಲವು ಸುಬಲವಹುದು |
ಆತನ ಪ್ರಭೆಯಿಂದೆ ತಮಸೆಲ್ಲ ನಾಶವಹುದು |
ನೀನಾತನಲ್ಲಿ ನಿಲೆ ಭೂತಭವ್ಯಗಳ ಮಾತೇಂ |
ಆ ಪರಬ್ರಹ್ಮನೊಳೆ ಸಕಲಮುಂ ಲೀನಮಲ್ತೆ || ೯

ಗುಡಿಗೋಪುರಂಗಳಿಂ ದೀಪಧೂಪಂಗಳಿಂ
ಮಂತ್ರಪುಷ್ಪಂಗಳಿಂ ಪರನೊಲಿಯನೈ |
ಪ್ರಾಣಿವರ್ಗದೊಳೆಲ್ಲ ಸೋದರತ್ವದಿ ಚರಿಪ
ಧರ್ಮಮಾ ದೇವಂಗೆ ನೈವೇದ್ಯವೈ |
ಕರುಣೆಯಿರ್ಪೆಡೆಯೊಳಾತನ ಶಾಂತಿಯಿರ್ಪುದೈ
ಲೋಕೋಪಕಾರಮಾತನ ಪೂಜೆಯೈ |
ಶೋಕತಪ್ತರಸಂಗಹೀನರಂ ದೀನರಂ
ಸಂತೋಷಗೊಳಿಪುದಾತನ ಸೇವೆಯೈ ||

ಈ ಧರ್ಮತತ್ತ್ವಮಂ ನರರೆಲ್ಲ ತಿಳಿದು ನಡೆಯೆ |
ದ್ವೇಷಮುಂ ಪಾಪಮುಂ ದುಃಖಮುಂ ದೂರ ತೊಲಗಿ |
ಪ್ರೀತಿಯುಂ ಪುಣ್ಯಮುಂ ಶಾಂತಿಯುಂ ಸ್ಥಿರದಿ ನೆಲಸಿ |
ಸ್ವರ್ಗಾಪವರ್ಗಗಳ್ ಭೂಮಿಯೊಳೆ ಸಿದ್ಧಿಸುವುವೈ || ೧೦



## ಸರ್ವಮತ ಸಿದ್ಧಾಂತ

ಎನಿತೊ ಮತಂಗಳುಂ ನಿಗಮ ಶಾಸ್ತ್ರ ಪುರಾಣಗಳುಂ ಮಗುಳ್ದು ತಾ-|
ವೆನಿತೊ ಮಠಂಗಳುಂ ಗುರುಗಳುಂ ವ್ರತಹೋಮಜಪಾದಿಕರ್ಮಮುಂ ||
ಮನುಜರು ಸರ್ವಭೂತಗಳೊಳಂ ಪ್ರಿಯಭಾವವ ತೋರಲಾಗ ಸಂ-|
ಜನಿಪುದು ಸರ್ವಕರ್ಮಗಳಿನಾಗದ ಸೌಖ್ಯಮದೆಲ್ಲ ಲೋಕಕಂ ||

—ಬಹುಶಃ, ವಿಲ್‌ಕಾಕ್ಸ್

# 'ಆತ್ಮಗೀತೆ'ಯ ಪ್ರಸ್ತಾವನೆ

ಆತ್ಮಗೀತೆಯು ವಾಲ್ಟ್ ವ್ಹಿಟ್‌ಮನ್ (Walt Whitman) ಎಂಬ ಆಂಗ್ಲ ಭಾಷಾ ಕವಿಯ "ಸಾಂಗ್ ಆಫ್ ಮೈ-ಸೆಲ್ಫ್" (ಸ್ವಾತ್ಮವಿಷಯಕವಾದ ಹಾಡು) ಎಂಬ ಕೃತಿಯ ಕೆಲವು ವಾಕ್ಯಗಳ ಅನುವಾದ.

ವ್ಹಿಟ್‌ಮನ್ ಕವಿ ಅಮೆರಿಕದವನು. ಆತನು ಕ್ರಿ. ಶ. ೧೮೧೯ ರಿಂದ ೧೮೯೨ ರ ವರೆಗೆ ಬಾಳಿದನು. ಆತನು ವಿರಕ್ತನಾಗಿದ್ದುಕೊಂಡು, ಬಡವರೂ ಸಾಮಾನ್ಯ ವೃತ್ತಿಗಳಲ್ಲಿರತಕ್ಕವರೂ ದೀನರೂ ಆದ ಜನರಿಗೆ ಆಪ್ತ ಮಿತ್ರನಾಗಿ, ಪರತತ್ತ್ವ ವಿಚಾರಕನಾಗಿ, ತನ್ನ ಅಂತರಾತ್ಮನಿಗೆ ತೋರಬಂದ ತತ್ತ್ವಗಳನ್ನು ಉಪಪಾದಿಸುವುದರಲ್ಲಿ ಯಾರಿಗೂ ಹೆದರದವನಾಗಿ, ಯಾವ ನಿರ್ಬಂಧಕ್ಕೂ ಸಿಕ್ಕದವನಾಗಿ ಆಯುಷ್ಯವನ್ನು ಕಳೆದನು.

ಈ ಆತ್ಮಗೀತೆಯ ವಚನಗಳಿಗೆ ಸಮಾನಗಳಾದ ವಚನಗಳನ್ನು ಈಶಾವಾಸ್ಯಾದ್ಯುಪನಿಷತ್ತುಗಳಲ್ಲಿಯೂ ಭಗವದ್ಗೀತಾದಿ ಶಾಸ್ತ್ರಗಳಲ್ಲಿಯೂ ಹೇರಳವಾಗಿ ಕಾಣಬಹುದು. ಇದರ ಮೊದಲನೆಯ ವಿಭಾಗದಲ್ಲಿ ಪರಮಾತ್ಮನ ಸರ್ವವ್ಯಾಪಕತೆಯೂ ಅದರಿಂದ ಬೋಧಿತವಾಗುವ ಸರ್ವ ಸಮತಾ ನೀತಿಯೂ ಸೂಚಿತವಾಗಿವೆ. ಎರಡನೆಯ ವಿಭಾಗದಲ್ಲಿ ಮಾನವ ವ್ಯಕ್ತಿಯು ಅವನ ಸುತ್ತಲೂ ಇರುವ ಸಮಸ್ತ ಪ್ರಪಂಚಕ್ಕೆ ಎಷ್ಟು ಮಹಾ ಋಣಿಯಾಗಿದ್ದಾನೆ, ಹೇಗೆ ಅದರ ಅಂಶಮಾತ್ರನಾಗಿದ್ದಾನೆ, ಎಂಬುದು ಸೂಚಿತವಾಗಿದೆ. ಮೂರನೆಯ ಮತ್ತು ನಾಲ್ಕನೆಯ ವಿಭಾಗಗಳಲ್ಲಿ ಕ್ರಮವಾಗಿ ಸ್ಥಲಚರಗಳಾದ ಮತ್ತು ಜಲಚರಗಳಾದ ಜೀವರಾಶಿಗಳೊಡನೆ ಮನುಷ್ಯನು ಐಕ್ಯವನ್ನು ಅನುಸಂಧಾನಮಾಡಬೇಕೆಂಬುದು ಸೂಚಿತವಾಗಿದೆ.

# ಆತ್ಮಗೀತೆ

೧

ನಾನವಿದಿತಾಖಂಡ ಪರಸತ್ತ್ವದೊಳಕೆ |
ಮಾನವರನೆಲ್ಲರಂ ಕರೆವೆ ಸುಖಿಪುದಕೆ ||
ಆತ್ಮ ತಾನಮಿತಬಲನಾತ್ಮ ತಾಂ ಪರಮಂ |
ಆತ್ಮ ತಾಂ ಮೃತಿರಹಿತನಾತ್ಮ ತಾಂ ಪೂರ್ಣಂ ||
ಎನ್ನಾತ್ಮವನೆ ನಿಖಿಲರಲ್ಲಿ ಕಾಣುತಿಹೆಂ |
ಎನ್ನ ಗುಣದೋಷಗಳನವರೊಳೆಣಿಸುತಿಹೆಂ ||
ಪಿರಿಯರುಂ ಕಿರಿಯರುಂ ಸಮರೆನ್ನ ಮನದೊಳ್ |
ಸರಿಯೆಲ್ಲರವರವರ ಕಾಲ ತಾಣಗಳೊಳ್ ||
ನರನವೊಲು ನಾರಿಯುಂ ಸಂಭಾವ್ಯಳಲ್ತೆ |
ಪುರುಷನಂ ಪೆತ್ತವಳೆ ಸಂಮಾನ್ಯಳಲ್ತೆ ||

೨

ಎನಿತೊ ಕಾಲದ ಫಲದಿನಿಂತು ಜನ್ಮಿಸಿಹೆಂ |
ಎನಿಬರೋ ಉಪಕರಿಸೆ ನಾನಿಂತು ಬೆಳೆದೆಂ ||
ಇಂತೆನಿತೊ ಜೀವಿಗಳುಮೆನಿತೊ ಲೋಕಗಳುಂ |
ತಂತಮ್ಮ ನಿಯಮಗಳೊಳಿಹವು ಸಂತತಮುಂ ||
ಈ ವಿಧಿಯೊಳನ್ಯೋನ್ಯ ಸಂಬದ್ಧಮಾಗಿ |
ಈ ವಿಶ್ವದೊಳ್ ಸಕಲಮಿರೆ ಚಿತ್ರಮಾಗಿ ||
ಇದನೆಲ್ಲ ಭೇದಿಸುತೆ ಮುತ್ತಿಕೊಂಡಿಹುವು |
ಮೊದಲು ಕೊನೆಯಿಲ್ಲದಿಹ ಕಾಲ ದಿಕ್ಕುಗಳು ||
ಕಾಲ ದೇಶಂಗಳನತಿಕ್ರಮಿಸಿ ನಿತ್ಯಂ |
ಸ್ಥೂಲ ಸೂಕ್ಷ್ಮಂಗಳೊಳ್ ವ್ಯಾಪಿಸುತೆ ಸತ್ಯಂ ||

ಪರಮಾತ್ಮನಿಹನು ನಿಲ್ಲಿಸುತ ಕೊಲ್ಲಿಸುತಂ |
ಪರಿಪೂರ್ಣನಾತನಾತನೆ ಸರ್ವಶಕ್ತಂ ||
ಆತನುದ್ಭಾವಸೆಗಳೆ ಸಕಲ ರೂಪಗಳುಂ |
ಆತನಿಂ ಪುಟ್ಟುವುವೆ ಸಕಲ ಶಬ್ದಗಳುಂ ||
ಆತನಂ ಕಾಣಲ್ಕೆ ಕಷ್ಟವೇನಿಹುದೈ |
ಆತನಿಂ ಬೇರೊಂದು ವಸ್ತುವೆಲ್ಲಿಹುದೈ ? ||

೩

ವನ ನದೀ ಗಿರಿ ನಿವಹದಿಂ ಮೆರೆವ ಧರೆಯೇ |
ದಿನಪ ಶಶಿ ಕಿರಣಗಳಿನೆಸೆಯುತಿಹ ತಿರೆಯೇ ||
ಎನಗೊಲವನಿತ್ತು ಸಲಹುವ ತಾಯೆ ಬಂದೆಂ |
ನಿನಗೆನ್ನ ಸಂಪ್ರೀತಿ ಪುಷ್ಪಮಂ ತಂದೆಂ ||

೪

ವಾರಿಧಿಯೆ ನಿನ್ನೊಳಿದೊ ಸೇರುವೆನು ಬೇಗ |
ಬಾರೆಂದು ನಿನ್ನಲೆಗಳುಲಿಯುತಿಹುವೀಗ ||
ನಿನಗೆನ್ನೊಳೆನಿತು ಸಂಪ್ರೀತಿಯಿಹುದಯ್ಯ |
ಎನಗಮಂತೆಯೆ ನಿನ್ನೊಳನುರಾಗವಯ್ಯ ||
ನಿನ್ನೊಳೈಕ್ಯವ ಪಡೆಯೆ ಕಾದಿರ್ಪೆನಯ್ಯ |
ಎನ್ನನೀ ತೀರದಿಂದಾಕರ್ಷಿಸಯ್ಯ ||
ನಿನ್ನ ವೀಚಿಗಳೊಳಾನುಯ್ಯಲಾಡುವೆನೈ |
ನಿನ್ನೊಳಾಂ ಜಲಕೇಳಿಯಾಡಿ ನಲಿಯುವೆನೈ ||
ನಿನ್ನಯ ಶ್ವಾಸಂಗಳಿನಿತು ಭೀಷಣಮೇಂ |
ನಿನ್ನುಪ್ಪುನೀರು ಜೀವಿಗಳ ಕಣ್ಣೀರೇಂ ||
ನೀನೆನಿಬರಿಗೆ ರುದ್ರಭೂಮಿಯಾಗಿಹೆಯೈ |
ನೀನೆನಿತು ಗಂಭೀರನೆನಿತು ಚಂಚಲನೈ ||
ಏಕರೂಪನನೇಕ ರೂಪನಾಂ ನಿನ್ನೊಳ್ |
ಏಕಮಾನಸನಾಗಿ ಬೆರೆವೆನಾಂ ನಿನ್ನೊಳ್ ||

# ದೇವರೆಲ್ಲಿ ?

ಮೀನೊಂದು ವಾರಿಧಿಯೊ|
ೞಾನಂದದಿಂದಿರುತ|
ತಾನೊಂದುದಿನಮೆಂದಿತಚ್ಚರಿಯೊಳು ||
ನಾನಂಬುಧಿಯ ವರ್ತೆ|
ಮಾನವನು ಕೇಳಿರ್ಪೆ|
ನಾ ನೀರ ರಾಶಿಯನು ಕಾಣ್ಬುದೆಂತು || ೧

ಖಗವೊಂದದೊಂದು ದಿನ|
ಗಗನದೊಳ್ ಪಾರುತಲಿ|
ಮಿಗೆ ಸಂತಸಂದಳೆದು ಪೇಳ್ದುದಿಂತು ||
ಜಗದಿ ಮಾರುತನೆ ಜೀ|
ವಿಗಳ ಬದುಕಿಪನೆಂದು|
ಬಗೆದಿರ್ಪರವನನಾಂ ಕಾಣ್ಬುದೆಂತು || ೨

ನರನುಮಂತೆಯೆ ಸತತ|
ಮಿರುತಲಾ ಪರಮನೊಳೆ|
ಪರಮಾತ್ಮನಿರ್ಪೆಡೆಯ ತಿಳಿಯದಿಹನು ||
ಪರಿಕಿಸಿದೊಡಾ ಪರಾ|
ತ್ಪರನೆತ್ತಲೆತ್ತಲುಂ|
ಮೆರೆಯುತಿಹನೆನಿಸೆನಿತೊ ರೂಪಗಳೊಳು || ೩

—ಮೂಲ, ವಿಸ್ಮೃತ

# ಬೇಡಿಕೆ

ನಿಷ್ಕಳಂಕನೆ ನಿನ್ನ ಸಂಕಲ್ಪವಿಲ್ಲದೊಡ
ದೇನುಮಾಗದು ಮೇಣದೇನುಮಿರದೈ |
ಅನುಪಮಿತಮಹಿಮನೇ ಅರಿಯಲಾರೆನು ಶುಭದ
ಹಾದಿಯನು ನೀನೊಬ್ಬನರಿಯಬಲ್ಲೈ |
ಕಾರುಣ್ಯಮೂರುತಿಯೆ ಕಾಯಸುಖವನು ಬಯಸಿ
ಕಡು ಕಷ್ಟಪಡುವೆನ್ನೊಳಿರಿಸು ಕೃಪೆಯಂ |
ಅಮಿತತೇಜೋಮಯನೆ ಅಜ್ಞಾನತಿಮಿರದಿಂ
ಕುರುಡನಾದೆನಗೆ ನೀಂ ಕಣ್ಣ ನೀಡೈ |
ಪ್ರೇಮಸ್ವರೂಪನೇ ನೀನೆನ್ನ ಹೃದಯಮರುವೊಳ್ |
ಪ್ರೇಮರಸಮಂ ಪರಿಯಿಸುತ್ತೆ ದೃಢಸತ್ತ್ವವಿತ್ತು |
ಪ್ರೇರಿಸೆನ್ನನು ಜೀವಕೋಟಿಗಳ ಹಿತದೊಳನಿಶಂ |
ಸಕಲಜೀವಿಗಳ ಸಂಪ್ರೇರಕನೆ ಪಿತನೆ ಹಿತನೇ ॥ ೧

ಬಿದಿಯೆನ್ನ ಬೆಂಬಿಡಿದು ಬೇಟೆಯಾಡುತಿರೆ ನೀಂ
ಸಿಂಹವಿಕ್ರಮವನೆನ್ನೆದೆಯೊಳಿರಿಸೈ |
ಭವದುರುಬುಮಳುವುಮೆನ್ನಯ ಕಿವಿಯನಿರಿಯೆ ನೀಂ
ಸವಿಹಾಡುಗಳಿನೆನ್ನ ಮನವ ತಣಿಸೈ |
ಜಗದುಬ್ಬೆಗದಿ ಜೀವ ಕಾದು ಹೊಗೆಯೊಗೆದಂದು
ಮುಗಿಲಾಗಿ ಬಂದು ನೀಂ ಸುಧೆಯ ನೆರೆಯೈ |
ಬಾಳು ಬೀಳ್ಬಯಲಾಗಿ ಬರಿದೆಂದು ತೋರ್ದಂದು
ದೊರೆಯ ದಿಬ್ಬಣವ ನೀನತ್ತ ಮೆರೆಸೈ ॥
ಸೃಷ್ಟಿಮೋಹಿನಿಯೆನ್ನ ಕಣ್ಕಟ್ಟುವಾಟಕೆಳೆದು |
ಅಷ್ಟದಿಕ್ಕೋಣಗಳೊಳಲೆಯಿಸುತ ಗಾಸಿಗೊಳಿಸೆ |
ದೃಷ್ಟಿಯಲಿ ನಿಂತು ನೀಂ ನಿರ್ಭಯದ ಪದವ ತೋರೈ |
ನಿತ್ಯಪರಿಪೂರ್ಣ ಶಿವ ಸಚ್ಚಿದಾನಂದ ಗುರುವೇ ॥ ೨

ಎರಡನೆಯ ಭಾಗ

# ವಂದೇ ಮಾತರಂ

(ಶ್ರೀ ಬಂಕಿಮಚಂದ್ರರ ಪ್ರಖ್ಯಾತ ರಾಷ್ಟ್ರಗೀತೆಯನ್ನನುಸರಿಸಿದ್ದು)

ವಂದೇ ಮಾತರಮಮಲಾಂ |
ಸುಜಲಾಂ ಸುಫಲಾಂ ಸುಸಸ್ಯಸಂಪನ್ನಾಂ |
ಭರಣೀಂ ಭಾರತಧರಣೀಂ |
ತ್ವಾಂ ರಿಪುಹರಣೀಂ ಸುತಾರ್ತಿಪರಿಹರಿಣೀಂ || ೧

ವಂದೇ ಮಾತರಮಾರ್ಯಾ-|
ಮಖಿಲೇಡ್ಯಾಮಮಿತರತ್ನ ಕನಕಾಢ್ಯಾಂ |
ಶುಭ್ರಜ್ಯೋತ್ಸ್ನಾ ಪುಲಕಿತ |
ರಜನೀಂ ತ್ವಾಂ ಶ್ರೀಮತೀಂ ಚ ಪುಣ್ಯಾವತೀಂ || ೨

ದೇಶಮಯೀಂ ಕೋಶಮಯೀಂ |
ಕುಶಲಮಯೀಂ ಸುಖಮಯೀಂ ಪ್ರಮೋದಮಯೀಂ |
ಅಯಿ ಮಧುರಾಲಾಪಮಯೀಂ |
ತ್ವಾಂ ವಂದೇ ಮಾತರಂ ಚ ಸುಗುಣಮಯೀಂ || ೩

ಕರ್ಮ ತ್ವಂ ಮರ್ಮ ತ್ವಂ |
ಸದ್ಧರ್ಮಸ್ತ್ವಂ ತಥೈವ ಶರ್ಮ ತ್ವಂ |
ಭರ್ಮ ತ್ವಂ ವರ್ಮ ತ್ವಂ !
ತ್ವಾಂ ವಂದೇ ಮಾತರಂ ವಿದ್ಯಾಂ || ೪

ಪ್ರಾಣಾಸ್ತ್ವಮೇವ ದೇಹೇ |
ಭುಜಯೋಶ್ಶಕ್ತಿಸ್ತ್ವಮೇವ ದೇಹಭೃತಾಂ |
ಹೃದಯೇ ತ್ವಮೇವ ಭಕ್ತಿ |
ಸ್ತ್ವಾಂ ವಂದೇ ಮಾತರಂ ದೇವೀಂ || ೫

# ರಾಮಕೃಷ್ಣ ಪರಮಹಂಸ

ಶ್ರೀ ಕಾಳಿಕಾ ಪಾದಪದ್ಮ ಮಧುಕರನಾಗಿ
ತತ್ತ್ವಾನುಸಂಧಾನ ನಿರತನಾಗಿ ।
ನಾಸ್ತಿಕ್ಯತಿಮಿರಹರಚಂಡಭಾಸ್ಕರನಾಗಿ
ವೈರಾಗ್ಯರಾಜ್ಯಾಧಿರಾಜನಾಗಿ ।
ವಿವಿಧ ಮತ ಸಿದ್ಧಾಂತ ಸಾಮ್ಯ ದರ್ಶಕನಾಗಿ
ವೇದಾಂತಮರ್ಮೈಕದೃಷ್ಟಿಯಾಗಿ ।
ಶ್ರೀ ಶಂಕರಾದಿ ಸದ್ಗುರುಪಙ್ಕ್ತಿಯೊಳು ಸೇರ್ದ
ಪರಹಂಸನಾಗಿ ಕರುಣಾಳುವಾಗಿ ॥

ಕ್ರೈಸ್ತ ಮಹಮದ ಮುಖ್ಯ ಮತಗಳುಂ ಸಾರ್ಥಮೆಂದು ।
ಸ್ವಾನುಭವದಿಂ ಬಗೆದು ಸಾರುತ್ತೆ ಲೋಕಹಿತಮಂ ।
ಶ್ರೀ ವಿವೇಕಾನಂದಸಂಪೂಜ್ಯಚರಣಕಮಲಂ ।
ಮೆರೆದನಾ ಶ್ರೀರಾಮಕೃಷ್ಣಾಖ್ಯ ಯೋಗಿವರ್ಯಂ ॥



# ರಾಜಾ ರಾಮಮೋಹನ ರಾಯ್

ನಿಖಿಲ ಜೀವಂಗಳೊಳ್ ನೆರೆದಿರ್ಪ ದೇವನಂ
        ನಿರ್ಜೀವವಸ್ತುಗಳೊಳರಸಲೇಕೆ ? |
ಲೋಕಪಿತನೊರ್ವನಿರೆ ಸೋದರಾದವರಿದೆ
        ಜಾತಿವಿಷಮತೆಗಳಲಿ ಕುದಿಯಲೇಕೆ ? |
ಬಹುಮಂದಿ ಮಹಿಳೆಯರ ಪುರುಷನುದ್ವಹಿಸುತಿರೆ
        ವಿಧವೆ ತಾನಗ್ನಿಯಲಿ ಬೀಳ್ವುದೇಕೆ ? |
ವಿದ್ಯೆಯಾರಾಧ್ಯವಿರೆ ಪರದೇಶಗಳ ಸಾರ್ದು
        ನೂತ್ನ ಕಲೆಗಳ ಯುವರ್ ಕಲಿಯರೇಕೆ ? ||
    ಇಂತು ನಿಜಜನಕುಲದ ಮೌಢ್ಯಗಳ ತಿರ್ದಿದಾತಂ |
    ಆರ್ಷವೇದಪ್ರಭೆಯು ಜಗಕೆಲ್ಲ ಬೆಳಗಿದಾತಂ |
    ಭಾರತದ ಯಶವನ್ನೈರೋಪ್ಯರೊಳು ಸಾರಿದಾತಂ |
    ರಾಮಮೋಹನನೆಮ್ಮ ನವಯುಗಕ್ಕರುಣನಾದಂ ||



# ದಾದಾಭಾಯಿ ನವರೋಜಿ

ನಿಜದೇಶಂ ನಿಜಮಾತೃದೇವಿ ನಿಜದೇಶೀಯರ್ ನಿಜಭ್ರಾತೃಗಳ್ |
ನಿಜಸೌಖ್ಯಂ ನಿಜರಾಷ್ಟ್ರಸೌಖ್ಯಮೆ ಎನುತ್ತಂತರ್ಬಹಿಶ್ಶುದ್ಧಿಯಿಂ ‖
ಸುಜನಾರಾಧಿತಮಾರ್ಗದೊಳ್ ನಡೆದ ದಾದಾಭಾಯಿಯುಂ ಧನ್ಯನಂ |
ಭಜಿಪೆಂ ಮಾನಸಶುದ್ಧಿಯಂ ಬಯಸುತಂ ಶ್ರೀ ಭಾರತೀಸೇವೆಯೊಳ್ ‖

ತಾತ[1]ನೆನಿಪನಾತ್ಮೀಯರಿಗೆ ಸಹ |
ಜಾತ[2]ನೆಲ್ಲಜನರ್ಗೆ ಭಾರತ |
ಮಾತೆಗಮಿತ ಶುಭೋದಯದ ನವದಿನ[3]ದ ರವಿಯೆನಿಪಾ ‖
ರೀತಿಯಲಿ ಬಾಳ್ದಖಿಲರಿಂ ಸಂ |
ಪ್ರೀತನಾದ ಯಥಾರ್ಥನಾಮ |
ಖ್ಯಾತ ದಾದಾಭಾಯಿ ನವರೋಜಿಯ ಸದಾ ನೆನೆವೆಂ ‖

ತನುಸೌಖ್ಯವನೆ ಕೋರಿ ಧನದಾಸೆಯಲಿ ಬಳಲು-
ತೆನಿಬರೋ ಜನನಿಯನೆ ಮರೆಯುತಿಹರು |
ಘನವೆನಿಪ ಬಿರುದಾವಳಿಯ ಗಳಿಪ ಚತುರತೆಯೊ-
ಳೆನಿಬರೋ ಜೀವನವ ಕಳೆಯುತಿಹರು |
ನಿಜಜನರ ಮೇಲ್ಮೆಯಂ ನೆನೆಯದರೆನಿಮಿಷಮುಂ
ಪಶುಸುಖದೊಳೆನಿಬರೋ ಮುಳುಗುತಿಹರು |
ಜಾತಿಭೇದವೆ ಸೋದರತ್ವದಿಂ ಮೇಲೆನ್ನು-
ತೆನಿಬರೋ ವೈರದೊಳ್ಕೊರೆಯುತಿಹರು ‖
ದೇಶಹಿತವನೆ ತನ್ನ ಗುರಿಯೊಳಿಡುತೆ |
ಮುದದಿನಾತ್ಮಾರ್ಪಣೆಯನಾಕೆಗೆಸಗಿ |
ನಿಲುವ ಮಹನೀಯರತಿವಿರಳರವರೊಳಿಂದು |
ಪೂಜ್ಯನಾ ನವರೋಜಿ ಮೊದಲೆನಿಪನಲ್ತೆ ‖

---

[1] ತಾತ=ದಾದಾ, [2] ಸಹಜಾತ=ಭಾಯಿ, [3] ನವದಿನ=ನವರೋಜಿ

I have received your kind letter of
9th September – Please excuse delay.
With the letter were enclosed – copy of
the Proceedings of the Meeting of the
League, copy of the articles which
appeared in the Karnataka by the Trust
and a kind poem
I need not tell you how grateful and
gratified I am at all this very kind
expression of good wishes and words
on the occasion of my 91st birth day
May commemorate my most sincere
thanks to all kind friends who
have taken part in all these
kind matters
With best wishes

Yours sincerely

Dadabhai Naoroji

ದಾದಾಭಾಯಿ ನವರೋಜಿಯವರ ಹಸ್ತಾಕ್ಷರ

ಭಾರತೀಯರ ದುಃಖದುರ್ಬಲದೈನ್ಯದಾಸ್ಯಗಳೆಲ್ಲಮಂ |
ದೂರ ನೀಗುತೆ ವಿದ್ಯೆ ಸೌಖ್ಯ ಸುಸಂಪದಂಗಳನಾಗಿಪಾ ||
ದಾರಿತೋರಿದ ಬಂಧುವಾ ನವರೋಜಿಯಲ್ತೆ ನಿರಂತರಂ |
ಪ್ರೇರಿಕಾ ಮಹನೀಯನೆನ್ನಯ ಚಿತ್ತವೃತ್ತಿಯ ಧರ್ಮದೊಳ್ ||

ಪರಮಶುಭಚರಿತ್ರಂ ಭಾರತೀವೀರಪುತ್ರಂ |
ಪರಹಿತಕರವೃತ್ತಂ ಸತ್ಯಮಾರ್ಗಪ್ರವೃತ್ತಂ ||
ವಿರಚಿತಬಹುಪುಣ್ಯಂ ದೇಶಭಕ್ತಾಗ್ರಗಣ್ಯಂ |
ಸ್ಫುರಿಕೆ ಮನದಿ ದಾದಾಭಾಯಿಯೆಂಬಾ ವರೇಣ್ಯಂ ||

ಹನುಮಭೀಷ್ಮರವೊಲದ್ಭುತವೃತ್ತಂ |
ವಿನಯಶೌರ್ಯಕರುಣಾಗುಣಯುಕ್ತಂ ||
ಜನಪದೋದ್ಧರಣ ಧರ್ಮಕೃತಾರ್ಥಂ |
ಮನದೊಳಿರ್ಕೆ ನವರೋಜಿ ಮಹಾತ್ಮಂ ||

ಸ್ವರಾಜ್ಯಮಂತ್ರಬೋಧಕಂ ಸುರಾಜನೀತಿಕೋವಿದಂ |
ಪರೇಶಭಕ್ತಿಪೂರಿತಂ ಪರೋಪಕಾರದೀಕ್ಷಿತಂ ||
ಸ್ಫುರದ್ಯಶಶ್ಶರೀರನಾ ಗುರೂತ್ತಮಂ ಗುಣಾಕರಂ |
ವಿರಾಜಿಕಾವಗಂ ಮದೀಯ ಮಾನಸಾಬ್ಜಪೀಠದೊಳ್ ||





ಗೋಪಾಲಕೃಷ್ಣ ಗೋಖಲೆ

# ಗೋಪಾಲ ಕೃಷ್ಣ ಗೋಖಲೆ

ವರಗುಣಭೂಷಿತನೀತಂ |
ಪರಹಿತದೊಳೆ ತನ್ನ ಹಿತವ ಕಂಡವನೀತಂ ||
ಗುರುವೀತಂ ಸಮಗೆಂಬುದ |
ಮರೆವುದೆ, ಹಾ ವಿಧಿಯೆ, ನೀನದೇಂ ನಿರ್ದಯನೋ ||

ಧೀರಾಗ್ರಣಿಯಿಹ ಸುತನಂ |
ಬೇರೊಂದಂ ಬೇಡದಿರ್ದ ಭಕ್ತಾಗ್ರಣಿಯಂ |
ಕ್ರೂರಿ ಯಮಂ ಕರೆದೊಯ್ದಿರೆ |
ಭಾರತಭೂಮಾತೆಯೆಂತು ಸೈಸುವಳಕಟಾ ||

ಮನ್ನಣೆಯಂ ಸ್ವಾತಂತ್ರ್ಯಮ- |
ನುನ್ನತಿಯಂ ಭ್ರಾತೃಭಾವಮಂ ವಿದ್ಯೆಯುಮಂ ||
ನಿನ್ನವರೊಳ್ ನೆಲೆಗೊಳಿಪಾ |
ಜನ್ನದ ದೀಕ್ಷೆಯನು ಬಿಟ್ಟು ಪೋದೆಯ, ಸಖನೇ ||

ತ್ಯಜಿಸಿದೊಡಂ ನಿಜತನುವಂ |
ಸುಜನರ್ ಸತ್ಕೀರ್ತಿಕಾಯರಾಗಿರ್ಪುದರಿಂ ||
ನಿಜರೂಪಮದಿಲ್ಲದೊಡಂ |
ನಿಜಯಶದಿಂ ಬಾಳ್ವನಲ್ತೆ ಗೋಖಲೆಯೆಂದುಂ ||

ದಿನಮಣಿಯಸ್ತಮಿಸಿದೊಡಂ |
ಪುನರುದಯವನೊಂದಿ ಲೋಕಮಂ ಬೆಳಗುವವೊಲ್ ||
ಘನನಹ ಗೋಖಲೆಯುಂ ತಾಂ |
ಪುನರುದಯವನೊಂದಿ ಬಾರದಿರ್ಪನೆ ನಮ್ಮೊಳ್ ||

# ವಿವೇಕಾನಂದ ಸ್ವಾಮಿ

ಪುಣ್ಯಭೂಮಿಯೆ, ನಿನ್ನ ಪುಣ್ಯಗಂಧವನಖಿಲ
ಭುವನದೊಳ್ ಪಸರಿಸುತ ನಲಿವುದೆಂದು!
ಆರ್ಯಕುಲಜರೆ, ನಿಮ್ಮ ನಿಜಧರ್ಮದೀಪಮಂ
ಮರಳಿ ಬೆಳಗಿಸಿ ಗುರುತಿವಡೆವುದೆಂದು |
ವೇದಜನನಿಯೆ, ನಿನ್ನ ದಿವ್ಯಗಾನವ ಕೇಳೆ
ಜಗವೆಲ್ಲ ತಲೆವಾಗಿ ಬರುವುದೆಂದು |
ವೇದಾಂತಕೇಸರಿಯೆ, ನಿದ್ರೆಯಂ ತೊರೆದು ನೀಂ
ಗುಹೆಯಿಂದ ಪೊರಮಟ್ಟು ಮೆರೆವುದೆಂದು ||

ಇಂತು ನಿಜಜನಪದವನೆಚ್ಚರಂಗೊಳಿಸುತನಿಶಂ |
ಭರತಮಾತೆಯ ಚೈತ್ರಯಾತ್ರೆಯೊಳ್ ಪ್ರಮುಖನೆನಿಸಿ |
ವಿಬುಧವಂದಿತನಾಗಿ ಲೋಕಸಂಮಾನ್ಯನಾಗಿ |
ಶ್ರೀ ವಿವೇಕಾನಂದನೆಸೆದನಂದು ||





ಬಾಲಗಂಗಾಧರ ತಿಲಕರು

(ವೆಸ್ಲಿ ಪ್ರೆಸ್ಸಿನವರ ಕೃಪೆಯಿಂದ)

# ಬಾಲಗಂಗಾಧರ ತಿಲಕರು

ತಾಮಸಾವೃತರಾಗಿ ನಿಜಜನರ್ ನಿದ್ರಿಸಿರ-
ಲವರನೆಳ್ಚರಿಸಿದಾ ಧೀರನಾರು ? |
ದೇಶೀಯಃರಾತ್ಮ ಗೌರವವ ಮರೆತಿರಲಂದು
ದೇಶಮಹಿಮೆಯ ಸಾರಿ ಪೇಳ್ದನಾರು ? |
ರಾಷ್ಟ್ರಜನನಿಯುಡುಂಗಿರಲ್ ಪಾರತಂತ್ರ್ಯದಲಿ
ಸ್ವಾತಂತ್ರ್ಯವೇಕೆ ತನಗೆಂದನಾರು ? |
ದಾಸ್ಯದೊಳ್ ವೈಭವದಿ ನಲಿದು ಮೆರೆವುದಕಿಂತ
ಸೆರೆಮನೆಯೆ ತನಗೆ ಲೇಸೆಂದನಾರು ? ||

ತಿಲಕನಲ್ಲವೆ ಜಾನಪದಕಾರ್ಯಚತುರತಿಲಕಂ |
ವಿಬುಧಸಂಕುಲತಿಲಕನಾರ್ಯಭೂಭೃತ್ಯತಿಲಕಂ |
ಆತನೆಂದುಂ ಭರತಬಾಲಕರ ಮನದಿ ನಿಂದು |
ನೀಡುಗವರಿಗೆ ದೇಶಕೈಂಕರ್ಯಧೈರ್ಯಭರಮಂ ||





ಕವಿ ರವೀಂದ್ರರು

# ರವೀಂದ್ರನಾಥ ಠಾಕೂರ್

ರವಿಯರಿಯದ ಮರ್ಮಗಳಂ |
ಕವಿಯರಿತವನೆಂದು ಲೋಕಮೊರೆವುದು ಪುಸಿಯೇಂ ||
ರವಿ ಬೆಳಗೆ ಬಾಹ್ಯಲೋಕವ |
ಕವಿ ಬೆಳಗಿಪನಲ್ತೆ ಜನರ ಹೃದಯಾನ್ತರಮಂ ||

ಋಷಿಬಲಮಿಲ್ಲದವಂ ಕವಿ |
ವೃಷನೆನಿಪುದಶಕ್ಯಮೆಂದು ಬಗೆವುದು ಸಾಜಂ ||
ಋಷಿಹೃದ್ಗತ ಚಿನ್ಮೂರ್ತಿಯು |
ಸುಷಮಾಪ್ರತಿಫಲಮೆ ಕಾವ್ಯವನಿತಾವಿಭವಂ ||

ಪದಬಾಹುಳ್ಯದಿನಪ್ರಸಿದ್ಧಪದವೈಚಿತ್ರ್ಯಾಳಿಯಿಂ ಶ್ಲೇಷೆಯಿಂ |
ಪದುಳಂಗೊಳ್ಳಳದೆಂತು ಕಾವ್ಯವಧು ತಾಂ ಕಾಠಿನ್ಯಮಂ ತೋರಳೇಂ ||
ಹೃದಯಾಬ್ಜಂ ರಸಪೂರ್ಣಮಾಗಿ ಕವಿಯೊಳ್ ಪ್ರಜ್ಞಾರುಣೋದ್ದೀಪ್ತಿಯಿಂ |
ಪದಸೌಭಾಗ್ಯಮರಂದಮುಣ್ಮೆ ಕವಿತಾಶ್ರೀರೂಪಮುಜ್ಜೃಂಭಿಕುಂ ||

ಜೀವಲೋಕದೊಳಕ್ತಿಯಿಂ ಸಮ |
ಭಾವದಿಂದಲಿ ವರ್ತಿಸುತ ಪರ |
ದೇವಲೀಲೆಯೆ ಲೌಕಿಕವ್ಯಾಪಾರಮೆಂದೆಣಿಸಿ ||
ಸಾವಧಾನದಿ ವರ್ಣಿಸುತಲದ |
ತೀವಿದಾನಂದದಲಿ ತನ್ನೊಳು |
ಭಾವಿಸಂ ತಾನಲ್ತೆ ಕವಿ ಬೇರೊಂದು ಲೋಕವನು ||

ತಾನೆ ಜಗಂಗಳ ಕಲ್ಪಿಸುತುಂ ಸ್ವಾ |
ಧೀನತೆಯೊಳ್ಮುದಮೊಂದುತಲೆಂದುಂ ||
ಜ್ಞಾನಧನಂ ಕವಿ ಧೀರನುದಾರಂ |
ಮಾನಸರಾಜ್ಯಕೆ ರಾಜನೆನಿಪ್ಪಂ ||

# ಜಗದೀಶ ಚಂದ್ರ ಬೋಸ್

ಶ್ರೀ ಭಾರತೀ ತಾಯ ವಿಜ್ಞಾನವೈಸಿರಿಯ
ಲೋಕದೊಳ್ ವಿಸ್ತರಿಪ ಕುವರನೆನಿಸಿ |
ಕಪಿಲ ಕಾಣಾದಾದಿ ಸದಸದ್ವಿಚಾರಕರ
ಕುಲದ ಕೀರ್ತಿಗೆ ರನ್ನಗಲಶವೆನಿಸಿ |
ನರನವೊಲೆ ತರುಗಳುಂ ಸುಖದುಃಖಗಳನರಿವ
ಪರಿಯ ತೋರುವ ಯಂತ್ರಚಯವ ರಚಿಸಿ |
ಅಣುರೇಣು ತೃಣಗಳೊಳಮಮಲ ಚೈತನ್ಯವಿಹ
ಮರ್ಮವಂ ಲೋಚನಕೆ ವಿಷಯಮೆನಿಸಿ ||

ಭೌತತಾತ್ತ್ವಿಕ ಶಾಸ್ತ್ರ ಸಾಮ್ರಾಜ್ಯ ರಾಜನೆನಿಸಿ |
ವಿಶ್ವಸೃಷ್ಟಿಯ ಚತುರತೆಯ ವಿಶದಗೊಳಿಸಿ |
ಕಣ್ಗೆ ಕಾಣದ ತತ್ತ್ವಮಂ ಶ್ರಮಿಸುತರಸಿ |
ಮೆರೆವನೀ ಜಗದೀಶನಾರ್ಯಕುಲತೋಷಂ ||

ಪರತತ್ತ್ವವನರಿವೊಡೆಯುಂ |
ಸಿರಿಯಂ ಸುಖಮಂ ಸುಕೀರ್ತಿಯಂ ಪಡೆವೊಡೆಯುಂ ||
ಅರಿಭೀತಿಯ ಕಳೆವೊಡೆಯುಂ |
ತಿರೆಯೊಳ್ ವಿಜ್ಞಾನಮೊಂದೆ ಸಾಧನಮಲ್ತೇ ||

ಆ ವಿಜ್ಞಾನಕಲಾರಹಸ್ಯಗಳ ತಾವನ್ವೇಷಿಸುತ್ತಂ ಸುಹೃ |
ದ್ಭಾವಂದಾಳ್ದು ಜಗಕ್ಕೆ ಬೋಧಿಸುತುಮಂತೆಂದುಂ ಜಗತ್ಕರ್ತನಾ ||
ಸೇವಾಕಾರ್ಯದಿ ದೀಕ್ಷೆಯೊಂದಿ ನಿಜದೇಶೀಯರ್ ಶುಭಂಬೊಂದಲೆಂ- |
ದಾ ವಿಖ್ಯಾತ ಮಹಾಶಯಂ ರಚಿಸಿಹಂ ಚಿಜ್ಜ್ಯೋತಿಯಾಗಾರಮಂ ||



ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು

# ಮೋಕ್ಷಗುಂಡಂ ವಿಶ್ವೇಶ್ವರಯ್ಯ

ಜನಪದವೆ ದೇವನಿಲಯಮುಂ |
ಜನಸೇವೆಯೆ ದೇವಪೂಜೆಯೆನುತುಂ ಸತತಂ ||
ಘನಸಚಿವಧರ್ಮಮಾರ್ಗವ- |
ನನುಸರಿಸಿದನೀತನಲ್ತೆ ಸುಜನಪ್ರೀತಂ ||

ಭಜಕರ ಭಕ್ತಿಯ ಬಗೆಯದೆ |
ನಿಜಕರುಣೆಯನೆಂತು ರಾಜ್ಯದೇವತೆ ತೋರ್ಕುಂ ||
ಪ್ರಜೆಯಂತೆಯೆ ರಾಜ್ಯಮೆನು |
ತ್ತಜಸ್ರಮುಮಂ ಸಾರಿ ಪೇಳ್ದನೀತಂ ಖ್ಯಾತಂ ||

ಪರಮೋತ್ಸಾಹಸಮನ್ವಿತಂ ಪರಹಿತೋದ್ಯೋಗೈಕಬದ್ಧಾದರಂ |
ಸ್ಥಿರಸಂಕಲ್ಪನತಂದ್ರಯತ್ನನತುಲಪ್ರಾಗಲ್ಭ್ಯ ಶೌರ್ಯೋಜ್ಜ್ವಲಂ ||
ತರುಣರ್ಗೆಂದುಮಮಂದಪೌರುಷ ನಯೌದಾರ್ಯಂಗಳಂ ಬೋಧಿಪಾ |
ಗುರುವಾಗಿರ್ಕೆ ಗುಣಾಕರಂ ಬುಧವರಂ ವಿಶ್ವೇಶ್ವರಾರ್ಯಂ ಚಿರಂ ||



# ಮೋಹನದಾಸ್ ಕರಮಚಂದ್ ಗಾಂಧಿ

ಇಂದ್ರಿಯಂಗಳ ಜಯಿಸಿ ಚಿತ್ತಶುದ್ಧಿಯ ಬಯಸಿ
ಲೋಭಮಂ ತ್ಯಜಿಸಿ ರೋಷವ ವರ್ಜಿಸಿ |
ಸರ್ವಸಖ್ಯವ ಭಜಿಸಿ ತೃಪ್ತತೆಯನಭ್ಯಸಿಸಿ
ಸತ್ಯಪಾಲನೆಯೊಂದ ಮನದೊಳಿರಿಸಿ |
ಕಾಯಕಷ್ಟವ ಸಹಿಸಿ ವೈರಿಗಣಮಂ ಕ್ಷಮಿಸಿ
ಸರ್ವಸಮತೆಯ ಗಳಿಸಿ ಶಮವನರಸಿ |
ಸ್ವಾತ್ಮಶಿಕ್ಷಣಮೇ ಸ್ವರಾಜ್ಯಮೆನ್ನುತ ವಚಿಸಿ
ದೇಶಸೇವೆಯನೀಶಸೇವೆಯೆನಿಸಿ ||

ಸಾಧುವೃತ್ತಿಯ ಪಥವ ತನ್ನ ಬಾಳಿನೊಳೆ ತೋರಿ |
ಪಾಶವೀ ಬಲದ ದೌರ್ಬಲ್ಯಮಂ ವಿಶದಬಡಿಸಿ |
ಪಾಶ್ಚಾತ್ಯಜನಕಮಧ್ಯಾತ್ಮನೀತಿಯನು ಪೇಳ್ದಾ |
ದೈವಸಂಪನ್ಮಾರ್ಗದರ್ಶಕಂ ಗಾಂಧಿಯಲ್ತೆ ||





ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರು

(ವೆಸ್ಲಿ ಪ್ರೆಸ್ಸಿನವರ ಕೃಪೆಯಿಂದ)

# ಶ್ರೀ ಕೃಷ್ಣರಾಜೇಂದ್ರ ಒಡೆಯರವರು

ನಿಖಿಲಕರ್ಣಾಟಜನಸಂತೋಷಸಾಧನಂ
        ಭಾರತಾವನಿಪಾಲಕುಲಕಿರೀಟಂ |
ಸ್ವಾರ್ಶಲೋಕಾಧಾರಸಿಂಹಪೀಠಸ್ಥಿತಂ
        ಆರ್ಯವಿಹಿತಾಚಾರಧರ್ಮಶೀಲಂ |
ದೇಶಭಾಷಾಪ್ರೇಮಸಂಪೂರ್ಣಮಾನಸಂ
        ದೇವಪೂಜಾನಿರತನಮಲಚರಿತಂ |
ಪೌರಸ್ತ್ಯಪಾಶ್ಚಾತ್ಯವೈದುಷ್ಯಸಂಯೋಗ
        ಸಂಜನಿತ ಶುಭಗುಣಾದರ್ಶಮಹಿಮಂ ||

ಪ್ರಜೆಯ ಸೇವೆಯೆ ದೇವಸೇವೆಯೆಂದರಿತು ಸತತಂ |
ಚತುರಸಚಿವರನೊಂದಿ ಜನತೆಯೊಳ್ ಜನಮನೊಂದಿ |
ಸಕಲಸಂಪತ್ಸಮೃದ್ಧಿಯೋಗದಿಂ ಪುಣ್ಯಪಥದೊಳ್ |
ರಾಜಿಸಿದ ರಾಜನೀ ಶ್ರೀಕೃಷ್ಣ ಭೂಮಿಪಾಲಂ ||



# ದೇಶಭಕ್ತ ಪ್ರತಿಜ್ಞೆ

(ಗೋಖಲೆಯವರ ದೇಶಸೇವಕ ಸಂಘದ ನಿಬಂಧನೆಗಳಿಂದ)

ಎನ್ನಯ ಮಾನಸ ಭವನದೊ-|
ಳುನ್ನತ ವೇದಿಯಲಿ ದೇಶಮಾತೆಯನಿರಿಸು-|
ತ್ತೆನ್ನಯ ಸರ್ವಸ್ವಮನಾ|
ಪುಣ್ಯೋರ್ವೀದೇವಿಯಂಘ್ರಿಗರ್ಪಿಸಿ ಮಣಿವೆಂ || ೧

ಭಾರತರೊಳ್ ವಂಶಮತಾ-|
ಚಾರಂ ನೂರಿರೆಯುಮವರದೊಂದೆ ಕುಟುಂಬಂ ||
ಬೇರೆಣಿಕೆಗಳವರೆಡೆಯೊಳ್ |
ತೋರದವೊಲ್ ಸೋದರೈಕ್ಯಮಂ ನೆಲೆವಡಿಪೆಂ || ೨

ಕಲಹಿಸೆನಾರೊಳಮ್ ಅರ್ಥದ |
ಕಲುಷಂಗಳ ದೂರವಿಟ್ಟು ಧೀರಸ್ಮೃತಿಯಂ ||
ತಳೆದುರದೊಳವರ ಚರಿತೆಯ |
ಬೆಳಕಿಂದಾಂ ನಡೆದು ಬಾಳ ನೋಂಪಿಯ ಮಾಳ್ಪೆಂ || ೩

ರಾಜಕಟಾಕ್ಷಮನುಂ ಜನ-|
ತಾಜಲ್ಪಶ್ಲಾಘನೆಗಳನುಂ ಗಣಿಸದೆ ನಾಂ ||
ಭೂಜನನಿಯನೊಮ್ಮನದಿಂ |
ಪೂಜಿಸುವೆಂ ಸತ್ಯಧರ್ಮಸಂಯಮವಿಧಿಯಿಂ || ೪

ಜನಪದಸೇವೆಯೆ ದೈವಾ|
ರ್ಚನೆಯದು ನಮಗಾತ್ಮಭಾವವಿಸ್ತಾರನಯಂ ||
ಅನುಗೊಳುವೆಂ ರಾಷ್ಟ್ರಿಕ ಜೀ-|
ವನ ಕಾರ್ಯಂಗಳ್ಗೆ ದೀಕ್ಷಿತೋಚಿತ ಮತಿಯಿಂ || ೫

ಮಾನವ ಸಂಸ್ಕಾರಕ ಧ|
ರ್ಮಾನುವ್ರತಮಕ್ಕೆ ಸಾರ್ವಜನಿಕ ವಿಚಾರಂ ||
ಜ್ಞಾನಿಯಿನಕ್ಕುಂ ಶುಭ ಸಂ-|
ಧಾನಂ ರಾಜ್ಯಾದಿಲೌಕಿಕ ವ್ಯವಹೃತಿಯೊಳ್ || ೬



ಶ್ರೀ ಚೆನ್ನಕೇಶವ

# ಅನ್ತಃಪುರಗೀತೆ

## ಡಿ.ವಿ.ಜಿ.

ಕ್ರೌನ್ ೮. ೧೩೬ ಪುಟಗಳು; ಆರ್ಟ್ ಕಾಗದ; ೫೧ ಚಿತ್ರಗಳು

ಸಾದಾಪ್ರತಿ, ರೂ. ೩-೮-೦ ಕ್ಯಾಲಿಕೊ ಪ್ರತಿ, ರೂ. ೫-೦-೦

## ಕೆಲವು ಅಭಿಪ್ರಾಯಗಳು

Such a rare jewel. —ಎಂ. ಗೋವಿಂದ ಪೈ

ಇದು ಈಚಿನ ಕನ್ನಡ ಸಾಹಿತ್ಯದಲ್ಲಿ ತುಂಬ ಸುಂದರವಾದ ಕಾವ್ಯ ಮತ್ತು ಪುಸ್ತಕ ಎಂದು ಯಾರಾದರೂ ನೋಡಿದಕೂಡಲೆ ಹೇಳಬಹುದು.

—ಎ. ಆರ್. ಕೃಷ್ಣಶಾಸ್ತ್ರೀ

ಕಾವ್ಯದೃಷ್ಟಿಯಿಂದ ನೋಡುವವರಿಗೆ ಹಲವು ವಿಧಗಳಲ್ಲಿ ಇದೊಂದು ಅಪೂರ್ವವಾದ ಅಸದೃಶವಾದ ರಚನೆಯೆಂಬುದು ಸ್ಪಷ್ಟ ವಿಷಯ.

—ಶಾ. ಅನಂತಕೃಷ್ಣಶರ್ಮ

ಈಗಿನ ಕಾಲದಲ್ಲಿ ಶ್ರೀ ಗುಂಡಪ್ಪನವರ ಕಾವ್ಯದಿಂದ ಮರಳುಗಾಡಿನ ಮಧ್ಯದಲ್ಲಿ ಅಮೃತ ಸರೋವರವನ್ನು ಕಂಡಂತೆ ಆಗಿದೆ. —ಎಂ. ಆರ್. ಶ್ರೀನಿವಾಸಮೂರ್ತಿ

ಇಲ್ಲಿ ವಜ್ರದಂಥ ಪದ್ಯಗಳಿವೆ; ಅವಕ್ಕಿಂತ ಮೃದುವಾದ ಗೀತಗಳಿವೆ; ತುಂಬ ಸುಂದರವಾದ ಚಿತ್ರಗಳಿವೆ. ಕಣ್ಣಿಗೆ ಹಬ್ಬವಿದು; —'ಪುಸ್ತಕ ಪ್ರಪಂಚ'

"ಅನ್ತಃಪುರಗೀತೆ" is a gem in Kannada literature.

—ಎಸ್. ಕೆ. ಶಾಸ್ತ್ರಿ

... ಬೇಲೂರು ಶಿಲಾಬಾಲಿಕೆಯರ ಪ್ರತಿಯೊಂದು ಲಾಸ್ಯ, ಹಾವ-ಭಾವ, ವಿಲಾಸಗಳ ಮೇಲೂ ಶ್ರೀ ಡಿ.ವಿ.ಜಿ. ಯವರು ಸುಂದರ ವಚನವನ್ನು ಕಟ್ಟಿದ್ದಾರೆ.

—'ತಾಯಿನಾಡು'

ಕನ್ನಡ ಭಾಷೆಯಲ್ಲಿಯೇ ಅಪೂರ್ವವಾದ ಮುದ್ರಣ ಸೌಂದರ್ಯದೊಂದಿಗೆ ಶ್ರೀ ಗುಂಡಪ್ಪನವರ ಈ ಪುಸ್ತಕ. —'ಕರ್ಮವೀರ'

ಕಾವ್ಯಾಲಯ ಪ್ರಕಾಶಕರು * ಮೈಸೂರು